# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 695

ಸದಸ್ಯರ ಹೆಸರು : ಶ್ರೀ ಗೋವಿಂದ ರಾಜು (ವಿಧಾನಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 22-02-2022

ಉತ್ತರಿಸುವ ಸಚಿವರು : ಮಾನ್ಯ ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕೋಲಾರ ಜಿಲ್ಲೆಯಲ್ಲಿ ಎಷ್ಟು ಅಂಗನವಾಡಿ ಕೇಂದ್ರಗಳಿವೆ; ಇರುವ ಅಂಗನವಾಡಿಗಳು ಎಷ್ಟು ಮಕ್ಕಳನ್ನು ಹೊಂದಿವೆ; | ಕೋಲಾರ ಜಿಲ್ಲೆಯಲ್ಲಿ 2080 ಅಂಗನವಾಡಿ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. ಈ ಅಂಗನವಾಡಿ ಕೇಂದ್ರಗಳಲ್ಲಿ 6 ತಿಂಗಳಿನಿಂದ 3 ವರ್ಷದವರೆಗಿನ 55727 ಮಕ್ಕಳು, 3 ವರ್ಷದಿಂದ 6 ವರ್ಷದವರೆಗಿನ 43807 ಮಕ್ಕಳು ಸೇರಿ ಒಟ್ಟು 99534 ಮಕ್ಕಳು ಇರುತ್ತಾರೆ. |
| ಆ. | ಮಕ್ಕಳಿಗೆ ಪ್ರತಿನಿತ್ಯ ಯಾವ ಯಾವ ಊಟ ಮತ್ತು ತಿಂಡಿಯನ್ನು ನೀಡಲಾಗುವುದು; | ಅನುಬಂಧದಲ್ಲಿ ಒದಗಿಸಲಾಗಿದೆ. |
| ಇ. | ಕೋಲಾರ ಜಿಲ್ಲೆಯಲ್ಲಿ ಅಪೌಷ್ಟಿಕತೆಯಿಂದ ಬಳಲುತ್ತಿರುವ ಮಕ್ಕಳ ಸಂಖ್ಯೆಯೆಷ್ಟು; | ಕೋಲಾರ ಜಿಲ್ಲೆಯಲ್ಲಿ 179 ತೀವ್ರ ಅಪೌಷ್ಟಿಕ ಮಕ್ಕಳು ಹಾಗೂ 3431 ಸಾಧಾರಣ ಅಪೌಷ್ಟಿಕ ಮಕ್ಕಳು, ಒಟ್ಟು 3610 ಮಕ್ಕಳು ಅಪೌಷ್ಟಿಕತೆಯಿಂದ ಬಳಲುತ್ತಿದ್ದಾರೆ. |
| ಈ | ಅಪೌಷ್ಟಿಕತೆಯನ್ನು ಹೋಗಲಾಡಿಸಲು ಸರ್ಕಾರ ತೆಗೆದುಕೊಂಡಿರುವ ಕ್ರಮವೇನು? | ಅಪೌಷ್ಟಿಕತೆಯನ್ನು ಹೋಗಲಾಡಿಸಲು ಈ ಕೆಳಕಂಡಂತೆ ಕ್ರಮ ವಹಿಸಲಾಗುತ್ತಿದೆ.<br>• ಎಲ್ಲಾ ಮಕ್ಕಳಿಗೆ ಅಂಗನವಾಡಿ ಕೇಂದ್ರದಲ್ಲಿ ಪ್ರತಿ ದಿನ ರೂ.8.00 ಮೌಲ್ಯದ ಪೂರಕ ಪೌಷ್ಟಿಕ ಆಹಾರವನ್ನು ನೀಡಲಾಗುತ್ತಿದೆ.<br>• ತೀವ್ರ ಅಪೌಷ್ಟಿಕ ಮಕ್ಕಳಿಗೆ ಪ್ರತಿ ದಿನ ರೂ.12.00 ಮೌಲ್ಯದ ಪೂರಕ ಪೌಷ್ಟಿಕ ಆಹಾರವನ್ನು ನೀಡಲಾಗುತ್ತಿದೆ.<br>• ಅಂಗನವಾಡಿಗೆ ಹಾಜರಾಗುವ 3 ವರ್ಷದಿಂದ 6 ವರ್ಷದ ಎಲ್ಲಾ ಮಕ್ಕಳಿಗೆ ವಾರದಲ್ಲಿ 2 ದಿನ ಮೊಟ್ಟೆಯನ್ನು ನೀಡಲಾಗುತ್ತಿದೆ.<br>• ರಾಜ್ಯ ಸರ್ಕಾರದ ಕ್ಷೀರಭಾಗ್ಯ ಯೋಜನೆಯಡಿ 6 ತಿಂಗಳಿಂದ 6 ವರ್ಷದ ಎಲ್ಲಾ ಅಂಗನವಾಡಿ ಮಕ್ಕಳಿಗೆ ವಾರದಲ್ಲಿ 5 ದಿನ 150 ಮಿ.ಲಿ ಹಾಲನ್ನು (15ಗ್ರಾಂ ಕೆನೆಭರಿತ ಹಾಲಿನಪುಡಿ, 10 ಗ್ರಾಂ ಸಕ್ಕರೆ) ನೀಡಲಾಗುತ್ತಿದೆ.<br>• 6 ತಿಂಗಳಿಂದ 3 ವರ್ಷದ ತೀವ್ರ ಅಪೌಷ್ಟಿಕ ಮಕ್ಕಳಿಗೆ ಮತ್ತು 5 ಹಿಂದುಳಿದ ಜಿಲ್ಲೆಗಳಾದ ಬೀದರ್, ಕಲಬುರಗಿ, ರಾಯಚೂರು, ಯಾದಗಿರಿ ಮತ್ತು ಕೊಪ್ಪಳ ಇಲ್ಲಿಯ ಸಾಧಾರಣ ಅಪೌಷ್ಟಿಕ ಮಕ್ಕಳಿಗೆ ವಾರದಲ್ಲಿ 3 ದಿನ ಮೊಟ್ಟೆ ಹಾಗೂ 3 ದಿನ 200 ಎಂ.ಎಲ್ ಹಾಲನ್ನು, ಮೊಟ್ಟೆ ಸ್ವೀಕರಿಸದಿರುವ ಮಕ್ಕಳಿಗೆ ವಾರದಲ್ಲಿ 6 ದಿನ ಹಾಲನ್ನು ನೀಡಲಾಗುತ್ತಿದೆ. |

| | | |
|---|---|---|
| | | • 3 ವರ್ಷದಿಂದ 6 ವರ್ಷದ ತೀವ್ರ ಅಪೌಷ್ಠಿಕ ಮಕ್ಕಳಿಗೆ ಮತ್ತು 5 ಹಿಂದುಳಿದ ಜಿಲ್ಲೆಗಳಾದ ಬೀದರ್, ಕಲಬುರಗಿ, ರಾಯಚೂರು, ಯಾದಗಿರಿ ಮತ್ತು ಕೊಪ್ಪಳ ಇಲ್ಲಿಯ ಸಾಧಾರಣ ಅಪೌಷ್ಠಿಕ ಮಕ್ಕಳಿಗೆ ವಾರದಲ್ಲಿ 5 ದಿನ ಮೊಟ್ಟೆ ಹಾಗೂ 3 ದಿನ 200 ಎಂ.ಎಲ್ ಹಾಲನ್ನು, ಮೊಟ್ಟೆ ಸ್ವೀಕರಿಸದಿರುವ ಮಕ್ಕಳಿಗೆ ವಾರದಲ್ಲಿ 6 ದಿನ ಹಾಲನ್ನು ನೀಡಲಾಗುತ್ತಿದೆ.<br>• ತೀವ್ರ ಅಪೌಷ್ಠಿಕ ಮಕ್ಕಳಿಗೆ ಆರೋಗ್ಯ ಇಲಾಖೆಯ ಪೌಷ್ಠಿಕ ಪುನರ್ವಸತಿ ಕೇಂದ್ರ (NRC) ಗಳಲ್ಲಿ ಚಿಕಿತ್ಸೆ ನೀಡಲಾಗುತ್ತಿದೆ.<br>• ಆರೋಗ್ಯ ಮತ್ತು ಪೌಷ್ಠಿಕ ಶಿಬಿರಗಳನ್ನು ಏರ್ಪಡಿಸಿ ಅಧಿಕ ಪೌಷ್ಠಿಕತೆಯುಳ್ಳ ಆಹಾರಗಳನ್ನು ತಯಾರಿಸುವ ಕುರಿತು ಮತ್ತು ಮಕ್ಕಳಿಗೆ ಪೌಷ್ಠಿಕತೆಯುಳ್ಳ ಆಹಾರವನ್ನು ನೀಡಲು ತಿಳುವಳಿಕೆ ನೀಡಲಾಗುತ್ತದೆ.<br>• ಪ್ರತಿ ತಿಂಗಳು ನಡೆಸುವ ತಾಯಂದಿರ ಸಭೆಗಳಲ್ಲಿ ಅಪೌಷ್ಠಿಕತೆ ನಿವಾರಣೆ ಬಗ್ಗೆ ತೆಗೆದುಕೊಳ್ಳಬೇಕಾದ ಕ್ರಮಗಳ ಕುರಿತು ತಾಯಂದಿರುಗಳಿಗೆ ತಿಳುವಳಿಕೆ ನೀಡಲಾಗುತ್ತದೆ.<br>• ಪೋಷಣ್ ಅಭಿಯಾನ ಯೋಜನೆಯಡಿ ಪ್ರತೀ ತಿಂಗಳು ಎರಡು ಬಾರಿ ಸಮುದಾಯ ಆಧಾರಿತ ಚಟುವಟಿಕೆಗಳನ್ನು ನಡೆಸಲಾಗುತ್ತಿದ್ದು, ತಾಯಂದಿರಿಗೆ ಅಪೌಷ್ಠಿಕತೆ ಬಗ್ಗೆ ತಿಳಿಸಲಾಗುತ್ತಿದೆ.<br>• ಅಂಗನವಾಡಿ ಕೇಂದ್ರಗಳಲ್ಲಿ ಎಲ್ಲಾ ಮಕ್ಕಳ ಆರೋಗ್ಯ ತಪಾಸಣೆಯನ್ನು 3 ತಿಂಗಳಿಗೊಮ್ಮೆ ನಡೆಸಲಾಗುತ್ತಿದೆ. |

**ಸಂಖ್ಯೆ:** ಮಮಇ 49 ಐಸಿಡಿ 2022

(ಆಚಾರ ಹಾಲಪ್ಪ ಬಸಪ್ಪ)
ಗಣಿ ಮತ್ತು ಭೂ ವಿಜ್ಞಾನ, ಮಹಿಳಾ ಮತ್ತು
ಮಕ್ಕಳ ಅಭಿವೃದ್ಧಿ ವಿಕಲಚೇತನರ ಹಾಗೂ
ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಅನುಬಂಧ

**ಶ್ರೀ. ಗೋವಿಂದರಾಜು (ವಿಧಾನಸಭೆಯಿಂದ ಚುನಾಯಿತರಾ ದವರು)ಇವರ ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ: 695ಕ್ಕೆ ಮಾಹಿತಿ.**

**ಕೋಲಾರ ಜಿಲ್ಲೆಯ ಅಂಗನವಾಡಿ ಕೇಂದ್ರದ ಫಲಾನುಭವಿಗಳಿಗೆ ನೀಡುತ್ತಿರುವ ಆಹಾರ ಪದಾರ್ಥಗಳ ವಿವರ.**

| ಕ್ರಸಂ | ಮಕ್ಕಳ ವಿವರ | ಉಪಹಾರ | ಆಹಾರ ಸಾಮಗ್ರಿ | |
|---|---|---|---|---|
| 1 | 6 ತಿಂಗಳಿಂದ 3 ವರ್ಷದ ಮಕ್ಕಳು | ಸೋಮವಾರ ದಿಂದ ಶನಿವಾರದವರೆಗೆ ಮನೆಗೆ ವಿತರಿಸುವ ಆಹಾರ ಪದಾರ್ಥ(ಮಾಸ್ಟರ್ ಬ್ಯಾಗ್) | ಕೆನೆಭರಿತ ಹಾಲು (20 ದಿನಗಳಿಗೆ) | ಹಾಲಿನ ಪುಡಿ |
| | | | | ಸಕ್ಕರೆ |
| | | | 1 ಕೆ.ಜಿ ಬಹುಧಾನ್ಯ ಮಿಶ್ರಿತ ಗೋಧಿಮಡಿ ತಯಾರಿಸಲು ಬಳಸುವ ಧಾನ್ಯಗಳು (500 ಗೋಧಿ+350 ಹೆಸರುಬೇಳೆ+50 ರಾಗಿ + 100 ಕಡಲೆಬೀಜ) | |
| | | | ಬೆಲ್ಲ | |
| 2 | 3 ರಿಂದ 6 ವರ್ಷದ ಮಕ್ಕಳು | ಸೋಮವಾರ ದಿಂದ ಶುಕ್ರವಾರ ದವರೆಗೆ (5 ದಿನ) ಬೆಳಿಗ್ಗೆ 10.00 ಗಂಟೆಗೆ | ಕೆನೆಭರಿತ ಹಾಲು | ಹಾಲಿನ ಪುಡಿ |
| | | | | ಸಕ್ಕರೆ |
| | | **ಬೆಳಿಗ್ಗೆ 11.00 ಗಂಟೆಗೆ** | | |
| | 3 ರಿಂದ 6 ವರ್ಷದ ಮಕ್ಕಳು | ಮಂಗಳವಾರ ಮತ್ತು ಶುಕ್ರವಾರ | ಮೊಟ್ಟೆ | |
| | | ಸೋಮವಾರ, ಬುಧವಾರ ಮತ್ತು ಶುಕ್ರವಾರ | ಕಡಲೆಬೀಜದ ಚಿಕ್ಕಿ | ಕಡಲೇಬೀಜ |
| | | | | ಬೆಲ್ಲ |
| | | ಮಂಗಳವಾರ, ಗುರುವಾರ ಮತ್ತು ಶನಿವಾರ | ಮೊಳಕೆ ಭರಿಸಿದ ಹೆಸರು ಕಾಳು | ಹೆಸರುಕಾಳು |
| | | | | ತಾಳೆಎಣ್ಣೆ |
| | | | | ಉಪ್ಪು |
| | | ಸೋಮವಾರ ದಿಂದ ಶನಿವಾರದ ವರೆಗೆ (6 ದಿನ) ಮಧ್ಯಾಹ್ನ 1.00 ಗಂಟೆಗೆ | ಅನ್ನ ಸಾಂಬಾರ್ | ಫಾರ್ಟಿಫೈಡ್ ಅಕ್ಕಿ |
| | | | | ತೊಗರಿಬೇಳೆ |
| | | | | ತರಕಾರಿ |
| | | | | ಸಾಂಬಾರ್ ಪುಡಿ |
| | | | | ಸಾಸುವೆ |
| | | | | ತಾಳೆ ಎಣ್ಣೆ |
| | | | | ಉಪ್ಪು |
| | ತೀವ್ರ ಅಪೌಷ್ಠಿಕ ಮಕ್ಕಳು | ಒಂದೂವರೆಪಟ್ಟು ಆಹಾರ ನೀಡಲಾಗುತ್ತಿದೆ | | |